# ಮರುದಂ ತೋಟದ ಶಾಲೆಯಲ್ಲಿ ಪರಿಸರ ಶಿಕ್ಷಣ

ಪೂರ್ಣಿಮಾ ಅರುಣ್

ತಮ್ಮ ಸುತ್ತಮುತ್ತಲಿನ ಜಗತ್ತೇ ಮಕ್ಕಳಿಗೆ ಪರಿಸರ. ಅದು ಎಲ್ಲವನ್ನೂ ಒಳಗೊಂಡಿದ್ದು, ಎಲ್ಲೆಲ್ಲಿಯೂ ಇದೆ. ಚಿಕ್ಕ ಮಕ್ಕಳು ಹೊರಗಿರಲು ಇಷ್ಟಪಡುತ್ತಾರೆ. ಅವರು ಹೊರಗೆ ಹೋಗಬೇಕು ಹಾಗೂ ಅದರಲ್ಲಿ ಬೆರೆಯಬೇಕು. ಇದು ಅವರನ್ನು ಪರಿಸರಕ್ಕೆ ಒಗ್ಗಿಸುತ್ತದೆ, ನೆಲೆಯೂರಲು ಸಹಾಯ ಮಾಡುತ್ತದೆ, ವಸ್ತುಗಳ ನಡುವಿನ ಸಂಬಂಧಗಳು, ಬೆಸುಗೆಗಳು ಹಾಗೂ ಪರಿಮಾಣಗಳ ಕುರಿತು ಅರಿವು ಮೂಡಿಸುತ್ತದೆ; ಇದು ಅವರ ಇಂದ್ರಿಯಗಳಿಗೆ ಒಂದು ಶ್ರೀಮಂತ ಸಂವೇದನೆಯನ್ನು ಒದಗಿಸುತ್ತದೆ.

ಮಾನವರು ಬೆಳೆಸಿಕೊಳ್ಳುವ ಮೊದಲ ಇಂದ್ರಿಯ ಜ್ಞಾನ ಎಂದರೆ ಸ್ಪರ್ಶ ಜ್ಞಾನ ಎಂದು ಹೇಳಲಾಗುತ್ತದೆ. ಈ ಜ್ಞಾನವೇ ವಿವಿಧ ರೀತಿಯಲ್ಲಿ ನಮ್ಮ ಪರಿಸರದ ಅನುಭವವನ್ನು ಪ್ರಭಾವಿಸುವುದು ಮಣ್ಣನ್ನು ಮುಟ್ಟುವುದು, ಕಲ್ಲುಗಳನ್ನು ಎತ್ತಿಕೊಳ್ಳುವುದು, ಮರಳಿನಲ್ಲಿ ಆಟವಾಡುವುದು, ಅವರ ಮುಖದ ಮೇಲೆ ಬೀಸುವ ಗಾಳಿಯನ್ನು ಹಾಗೂ ಸೂರ್ಯನ ಕಿರಣಗಳನ್ನು, ನೀರಿನ ತೇವವನ್ನು ಅನುಭವಿಸುವುದು, ಮುಂತಾದವು ಹಾಗೆಯೇ ವಾಸನೆ ಹಾಗೂ ರುಚಿಯ ಜ್ಞಾನವು ಇವುಗಳನ್ನು ನಿಕಟವಾಗಿ ಅನುಸರಿಸಿ, ಅತ್ಯಂತ ಪ್ರಬಲವಾಗಿಯೂ ಇರುತ್ತದೆಯಾದ್ದರಿಂದ ಬಾಯಲ್ಲಿ ಹಾಕಿಕೊಳ್ಳುವ ತಡೆಯಲಾರದ ಬಯಕೆಯ ಕುರಿತೂ ಇದು ಹೇಳುತ್ತದೆ. ಇದೂ ಒಂದು ರೀತಿಯ ಹುಡುಕಾಟವೇ ಸರಿ. ಮಕ್ಕಳು ಪರಿಸರವನ್ನು ನೆಲದಿಂದ ಗ್ರಹಿಸಲು ಆರಂಭಿಸುತ್ತಾರೆ, ಏಕೆಂದರೆ ನೆಲವು ಮಕ್ಕಳಿಗೆ ಬಹಳ ಹತ್ತಿರವಾಗಿರುತ್ತದೆ ಅಥವಾ ಮಕ್ಕಳು ನೆಲಕ್ಕೆ ನಿಕಟವಾಗಿರುತ್ತಾರೆ.

ಮರುದಂ ತೋಟದ ಶಾಲೆಯಲ್ಲಿರುವ (Marudam Farm School) ನಮ್ಮ ವೃತ್ತಾಕಾರದ ಶಿಶುವಿಹಾರದ ಕಟ್ಟಡವು ಮಕ್ಕಳು ಸುತ್ತಲೂ ನೋಡಲು ಸಹಕಾರಿಯಾಗುವಂತೆಯೂ, ಮುಟ್ಟಲು, ವಾಸನೆಯನ್ನು ಗ್ರಹಿಸಲು, ಕೇಳಿಸಿಕೊಳ್ಳಲು ಮತ್ತು ಹೊರಾಂಗಣದಲ್ಲಿ ಏನಾಗುತ್ತಿದೆ ಎಂದು ನೋಡಲು ಅನುಕೂಲವಾಗುವ ಹಾಗೂ ಒಳಾಂಗಣದಲ್ಲಿದ್ದರೂ ಹೊರಾಂಗಣದಲ್ಲಿರುವಂತೆ ಭಾಸವಾಗುವ ವಾತಾವರಣವನ್ನು ಸೃಷ್ಟಿಸುತ್ತದೆ. ಜೇನ್ನೊಣಗಳು ಒಳಬರುತ್ತವೆ, ಕಣಜಗಳು ಗೋಡೆಯ ಮೇಲೆ ಗೂಡನ್ನು ಕಟ್ಟುತ್ತವೆ, ಅದರೊಳಗೆ ಬಾವಲಿಗಳು ವಾಸಿಸುತ್ತವೆ, ಕಪ್ಪೆ – ಇಲಿಗಳಾದರೋ ಅಲ್ಲಿನ ಶಾಶ್ವತ ನಿವಾಸಿಗಳು ಮತ್ತು ಹಾವುಗಳಂತೂ ಒಂದಕ್ಕಿಂತ ಹೆಚ್ಚು ಬಾರಿ ಆಮಂತ್ರಣ ಕೊಟ್ಟುಕೊಂಡಿವೆ.



**ಚಿತ್ರ 1.** ಶಿಶುವಿಹಾರದ ಮಕ್ಕಳು ನೈಸರ್ಗಿಕ ಬಣ್ಣ ಹಾಗೂ ಕೈ ಮುದ್ರಣದಿಂದ ಮಾಡಿದ ಒಂದು ತೂಗು ಚೀಲ.

ಶಿಶುವಿಹಾರವು ಸದೃಢ ಪರಿಸರ ಶಿಕ್ಷಣ ಕಾರ್ಯಕ್ರಮವನ್ನು ಹೊಂದಿದೆ. ಇದರಲ್ಲಿ ಪ್ರತಿ ದಿನವೂ ಶಾಲೆಯಲ್ಲಿರುವ ಒಂದು ನಿಗದಿತ ದಾರಿಯಲ್ಲಿಯೇ ಒಂದು ಗಂಟೆಯ ಪರಿಸರ ನಡಿಗೆಯನ್ನು ಒಳಗೊಂಡಿರುತ್ತದೆ. ನಮ್ಮ ಅನುಭವದ ಪ್ರಕಾರ ಮಕ್ಕಳು ನಿರಂತರವಾಗಿ ಅದೇ ದಾರಿಯಲ್ಲೇ ಎದುರಾದಾಗ, ಅವೇ ಮರಗಳು ಹಾಗೂ ಕಲ್ಲುಗಳ ನಡುವೆ ನಡೆದಾಗ ವಿವಿಧ ಋತುಮಾನಗಳನ್ನು ತಮ್ಮದಾಗಿಸಿಕೊಳ್ಳುತ್ತಾರೆ. ಈ ತಮ್ಮದಾಗಿಸಿಕೊಳ್ಳುವಿಕೆಯು (internalisation) ಮಕ್ಕಳ ಆಟದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ; ಉದಾಹರಣೆಗೆ ಬೇಸಗೆಯಲ್ಲಿ ಮಕ್ಕಳು ರಚನಾತ್ಮಕ, ಕಾಲ್ಪನಿಕ ಆಟಗಳಾದ ಮನೆಗಳ ನಿರ್ಮಾಣ ಹಾಗೂ ಗುಮ್ಮಟಗಳು, ಅಣೆಕಟ್ಟುಗಳು ಹಾಗೂ ಕೆರೆಗಳ ಕಟ್ಟುವಿಕೆಯಲ್ಲಿ ಬಹಳಷ್ಟು ಒಣಗಿದ ಕಡ್ಡಿಗಳನ್ನು, ಎಲೆಗಳನ್ನು ಹಾಗೂ ಸಣ್ಣ–ಕೊಂಬೆಗಳನ್ನು ಬಳಸುತ್ತಾರೆ; ಮಳೆಗಾಲದಲ್ಲಿ ಮಣ್ಣು, ಬೆಣಚುಕಲ್ಲುಗಳು ಹಾಗೂ ನೀರನ್ನು ಉಪಯೋಗಿಸುತ್ತಾರೆ. ಅಂತೆಯೇ ಚಳಿಗಾಲದಲ್ಲಿ ಚಿಟ್ಟೆಗಳ ರೆಕ್ಕೆಗಳನ್ನು, ಕಾಡಿನ ಹಣ್ಣು – ಹಂಪಲುಗಳನ್ನು ಸಂಗ್ರಹಿಸುತ್ತಾರೆ.

ಬೇಸಿಗೆಯು ಹೂವುಗಳ ಶೇಖರಣೆಯಿಂದ ತುಂಬಿ ತುಳುಕುತ್ತಿರುತ್ತದೆ. ಉದಾಹರಣೆಗೆ ನೆಲದ ಮೇಲೆ ಬೀಳುವ ಪಲಾಶ ಅಥವಾ ಮುತ್ತುಗದ ಮರದ (Flame of the Forest or Palash-Butea monosperma) ಹೂವುಗಳ ಸಂಗ್ರಹವನ್ನು ನೈಸರ್ಗಿಕ ಬಣ್ಣವನ್ನು ತಯಾರಿಸಲು ಬಳಸಿ ನಂತರ ಅದನ್ನು ಬಟ್ಟೆಗಳಿಗೆ ಬಣ್ಣ ಕಟ್ಟಲು ಬಳಸಲಾಗುತ್ತದೆ. ಈ ಸಲದ ಬೇಸಿಗೆಯಲ್ಲಿ ತಮ್ಮ ಸ್ವಂತ ಬಳಕೆಯ ಕೈಯಲ್ಲಿ ಹೊಲಿದ ಚೀಲಗಳಿಗಾಗಿ ಮಕ್ಕಳು ಅದೇ ಬಟ್ಟೆಯನ್ನು ಬಳಸಿದರು.

ಜೊತೆಗೆ ಪರಿಸರವೇ ಒಂದು ಆಟದ ಮೈದಾನವಾಗಿ – ತೆವಳುವುದು, ಹತ್ತುವುದು ಹಾಗೂ ಸಮತೋಲನ ಕಾಪಾಡಿಕೊಳ್ಳುವಂತಹ ಹೊಸ ಚಲನೆಗಳನ್ನು ಅಭ್ಯಾಸ ಮಾಡಲು ಮತ್ತು ಅವುಗಳನ್ನು ಕರಗತಗೊಳಿಸಿಕೊಳ್ಳಲು ಮಕ್ಕಳಿಗೆ ಒದಗಿ ಬರುತ್ತದೆ. ಉದಾಹರಣೆಗೆ, ನಮ್ಮ ಶಾಲೆಯಲ್ಲಿ ಮಕ್ಕಳು ಮರಗಳನ್ನು ಹತ್ತುವುದು, ಕಲ್ಲು ಬಂಡೆಯ ಮೇಲೆ ಸಮತೋಲನ ಕಾಪಾಡಿಕೊಳ್ಳುವುದು ಹಾಗೂ ಬಿಲಗಳಲ್ಲಿ ಮುದುಡಿಕೊಂಡು ಮತ್ತು ತೆವಳಿಕೊಂಡು ಹೋಗುವುದಕ್ಕೆ ಬೆಂಬಲ ನೀಡಿ ಪ್ರೋತ್ಸಾಹಿಸಲಾಗುತ್ತದೆ. ಇವನ್ನು ಮಾಡುವಾಗ ಮಕ್ಕಳು ಈ ರೀತಿಯ ಹೊಸ ಅನ್ವೇಷಣೆಗಳಲ್ಲಿ ಒಬ್ಬರಿಗೊಬ್ಬರು ಹೇಗೆ ಪರಸ್ಪರ ಸಹಾಯ ಮಾಡುತ್ತಾರೆ ಎಂಬುದನ್ನು ನಾವು ಗಮನಿಸಿದ್ದೇವೆ. ಮಗುವಿನ ದೇಹವು ಆವರಣದಲ್ಲಿ ಎಲ್ಲಿ ಇದೆ ಎನ್ನುವ ಸಂವೇದನೆಯು ಸಾಮಾನ್ಯವಾಗಿ ಮಗುವಿನ ದೃಷ್ಟಿಯಲ್ಲಿ ಪರಿಸರ ಹೇಗೆ ಕಾಣುತ್ತದೆಯೋ, ಅದರ ಮಧ್ಯದಲ್ಲಿಯೇ ಇದೆ ಎಂದು ಭಾಸವಾಗುವಂತಿರುತ್ತದೆ.



**ಚಿತ್ರ 2.** ಹತ್ತಿರದಲ್ಲೇ ಇರುವ ಒಂದು ಆಲದ ಮರವನ್ನು ಹತ್ತಲು ಮಕ್ಕಳ ಗುಂಪೊಂದು ಪರಸ್ಪರ ಸಹಾಯ ಮಾಡುತ್ತಿರುವುದು.

## ಬೆಳವಣಿಗೆ ಹಾಗೂ ಅರಿವಿನ ಹಂತಗಳು

5ರಿಂದ 7 ವರ್ಷ ವಯಸ್ಸಿನಲ್ಲಿ ಮಕ್ಕಳು ತಮ್ಮ ಅಂದರೆ 'ಮಾನವರು' ಹಾಗೂ ಪ್ರಕೃತಿಯ ಇತರ ಅಂಶಗಳ ನಡುವಿನ ವ್ಯತ್ಯಾಸದ ಕುರಿತು ಹೆಚ್ಚು ಜಾಗೃತರಾಗತೊಡಗುತ್ತಾರೆ. ಕೇವಲ ಇಂದ್ರಿಯಾತ್ಮಕ ವರ್ತನಾ ಹಂತದಲ್ಲಿದ್ದವರು (sensory mode of interaction) ಕುತೂಹಲ, ಪ್ರಶ್ನಿಸುವ ಹಂತಕ್ಕೆ ಸಾಗುತ್ತಾರೆ. ಅವರು ವಿಸ್ತೃತವಾಗಿ ಗಮನಿಸಿ ಅದರ ಕುರಿತು ಸ್ಪಷ್ಟವಾಗಿ ಮಾತನಾಡುವುದನ್ನು ಪ್ರಾರಂಭಿಸುವ ರೀತಿಯಲ್ಲಿ ಈ ಹಂತವನ್ನು ನಾವು ಕಾಣಬಹುದು. ಈ ನಿರ್ಣಾಯಕ ವಯಸ್ಸಿನಲ್ಲಿ ಶಿಕ್ಷಕರು (ಶಾಲೆಯಲ್ಲಿ ಅಥವಾ ಮನೆಯಲ್ಲಿ) ಮಗುವಿನ ಸಹಜವಾದ ಕುತೂಹಲವನ್ನು ಹತ್ತಿಕ್ಕದೆ ಇಂಬು ನೀಡಬೇಕು. ಹೊಸ ಅನುಭವಗಳೊಂದಿಗೆ ತೊಡಗಿಕೊಳ್ಳುವ ಹಾಗೂ ಅದನ್ನು ಅರ್ಥೈಸುವ ಸಾಮರ್ಥ್ಯ ಮತ್ತು ಕ್ಷಮತೆ ಈ ವಯಸ್ಸಿನಲ್ಲಿ ಅದ್ಭುತವಾಗಿರುತ್ತದೆ ಹಾಗೂ ಪರಿಸರವು ಈ ಸಾಮರ್ಥ್ಯವನ್ನು ಬಳಸಿಕೊಳ್ಳುವ ಎಣೆಯಿಲ್ಲದಷ್ಟು ಅವಕಾಶಗಳನ್ನು ಒದಗಿಸುತ್ತದೆ. ಉದಾಹರಣೆಗೆ, ನಾವು ಮಕ್ಕಳೊಡನೆ ಕಾಡಿಗೆ ಹೋದಾಗ, ಕಾಡಿನ ಪ್ರತಿಯೊಂದು ಅಂಶವೂ ಅವರನ್ನು ಬೆರಗುಗೊಳಿಸುತ್ತದೆ. ಅವರು ವಿವಿಧ ರೀತಿಯ ಮೇಲ್ಮೈ ಗುಣಗಳು, ಮುಳ್ಳುಗಳು, ಕೆಸರು, ಒಣ ಎಲೆಗಳೊಂದಿಗೆ ವ್ಯವಹರಿಸಬೇಕಾಗುತ್ತದೆ. ಮರೆಮಾಚಿಕೊಳ್ಳುವಿಕೆ (camouflage), ವೈವಿಧ್ಯತೆ, ತಾಪಮಾನ ಮುಂತಾದ ವಿವಿಧ ರೀತಿಯ ಪರಿಕಲ್ಪನೆಗಳನ್ನು ಅರ್ಥೈಸಿಕೊಳ್ಳಬೇಕಾಗುತ್ತದೆ.

ಮರುದಂನಲ್ಲಿ, ಈ ವಯಸ್ಸಿನ ಗುಂಪಿಗೆ, ಕಾರ್ಯಯೋಜನಾ ಆಧಾರಿತ ಕಲಿಕೆಯನ್ನು ಕೈಗೊಳ್ಳುತ್ತೇವೆ. ಇಲ್ಲಿ ಅವರ ಗಮನಿಸುವಿಕೆಯನ್ನು ಸುವ್ಯವಸ್ಥಿತ ಪರಿಶೀಲನೆಗೆ ಜೋಡಿಸಲಾಗುತ್ತದೆ. ಯುವ ವಿಜ್ಞಾನಿಗಳಂತೆ ಅವರು ಕೀಟದ ಡಬ್ಬಿಗಳು, ಅಳತೆ ಪಟ್ಟಿಗಳು, ಭೂತಗನ್ನಡಿಗಳು ಹಾಗೂ ರೇಖಾ ನಕ್ಷೆಯನ್ನು ಬರೆಯುವ ಚೌಕಗಳುಳ್ಳ ಕಾಗದವನ್ನು ಜೊತೆಗೊಯ್ಯುತ್ತಾರೆ. ಒಮ್ಮೆ ನಾವು 6 ವರ್ಷದ ಹುಡುಗಿ ಇರುವೆಗಳ ಬಗ್ಗೆ ಅಧ್ಯಯನ ಮಾಡುವುದನ್ನು ನೋಡಿದೆವು. ಅವುಗಳು ತಮ್ಮ ಮನೆಯನ್ನು ಬದಲಾಯಿಸುತ್ತಿದ್ದುದನ್ನು ಹಾಗೂ ತಮ್ಮ ಮರಿಗಳನ್ನು ಒಂದು ಜಾಗದಿಂದ ಇನ್ನೊಂದು ಜಾಗಕ್ಕೆ ಒಯ್ಯುವುದನ್ನು ಗಮನಿಸಿ ಮಳೆಗಾಲ ಬರುತ್ತಿರುವುದರಿಂದ ಹೀಗೆ ಮಾಡುತ್ತಿವೆ ಎಂದು ಆಕೆ ಅಂದಾಜಿಸಿದಳು. ಇನ್ನೊಂದು ಮಗುವು ಮಿಡತೆ ಜಾತಿಯ ಸೂರ್ಯನಕುದುರೆಗಳ (praying mantis) ಕುರಿತು ಅಭ್ಯಾಸ ಮಾಡಿ, ತಾನು ಕಂಡ ಚಿತ್ರಗಳಿಗಿಂತ ಅವು ಹೇಗೆ ಭಿನ್ನವಾಗಿ ಕಂಡವು ಎಂದು ತರಗತಿಗೆ ಹಿಂದಿರುಗಿದಾಗ ಉದ್ಗರಿಸಿದಳು. ನಿಜವಾದ ಚಿತ್ರಗಳಿರುವ ಒಂದು ಅಧಿಕೃತ ಪುಸ್ತಕವನ್ನು ಅವಳಿಗೆ ನೀಡಿದಾಗ (ಹಿರಿಯ ವಿದ್ಯಾರ್ಥಿಗಳಿಗಾಗಿ ಇರುವ ಪುಸ್ತಕ ಎಂದು ತೋರುವ) ಸಮಾಧಾನಗೊಂಡಳು. ಈ ಉದಾಹರಣೆಯು ಮಕ್ಕಳನ್ನು ಕೇವಲ ಮಾತುಗಳಿಂದಲೇ ತಣಿಸಬಾರದು ಎನ್ನುವುದನ್ನು ನೆನಪಿಸುತ್ತದೆ. ಸ್ವಂತ ಕುತೂಹಲದಿಂದ ಹುಟ್ಟಿದ ಅಧ್ಯಯನದಲ್ಲಿ ತೊಡಗಿಕೊಂಡಾಗ ಅವರಿಗೆ ಯಾವುದೇ ವಸ್ತುವನ್ನು ಕೊಟ್ಟರೂ ಅದರಿಂದ ಅರ್ಥಗಳನ್ನು ಹುಡುಕಿಕೊಳ್ಳಲು ಕಲಿಯುತ್ತಾರೆ. ಹಾಗಾಗಿ, ಅವರಿಗೆ ಕರಾರುವಾಕ್ಕಾದ ಹಾಗೂ ಅರ್ಥಪೂರ್ಣ ವಿವರಣೆಗಳನ್ನು ಒದಗಿಸಬೇಕಾದ ಜವಾಬ್ದಾರಿ ನಮ್ಮ ಮೇಲಿರುತ್ತದೆ.

ಮಕ್ಕಳು ಸ್ವಾಭಾವಿಕವಾಗಿ ಬಹಳ ಜಾಗೃತ ಸ್ಥಿತಿಯಲ್ಲಿ ಇರುತ್ತಾರಾದ್ದರಿಂದ ವಸ್ತುಗಳನ್ನು ವಿವರವಾಗಿ ಗಮನಿಸಲು ಸಮರ್ಥರಾಗಿರುತ್ತಾರೆ. ಅವರ ಅತ್ಯುತ್ಸಾಹ ಹಾಗೂ ಕುತೂಹಲದಿಂದಾಗಿ ಹೆಚ್ಚು ಅನ್ವೇಷಿಸಲು ಆತುರಪಡುತ್ತಾರೆ. ಅವರಿಗೆ ಕುತೂಹಲವೆನಿಸುವ ಯಾವುದೇ ಗಿಡವನ್ನಾಗಲಿ ಪ್ರಾಣಿಯನ್ನಾಗಲಿ ಮುಟ್ಟುವುದು, ಹೂಗಳನ್ನು ಕೀಳುವುದು, ಪಕ್ಷಿಯ ಗೂಡನ್ನು ಮುಟ್ಟುವುದು, ಹಾವನ್ನು ಹಿಂಬಾಲಿಸುವುದು ಇತ್ಯಾದಿ. ಪರಿಸರದಲ್ಲಿರುವ ಇತರ ಜೀವಿಗಳೊಂದಿಗೆ ತಾವು ಸ್ಥಳವನ್ನು ಹಂಚಿಕೊಳ್ಳುತ್ತಿದ್ದೇವೆ ಎನ್ನುವುದನ್ನೂ ಮಕ್ಕಳು ಇದೇ ಸಮಯದಲ್ಲಿ ಸುಲಭವಾಗಿ ಅರ್ಥಮಾಡಿಕೊಳ್ಳುತ್ತಾರೆ. ಇದೇ ಸಂದರ್ಭವನ್ನು ಬಳಸಿಕೊಂಡು ಶಿಕ್ಷಕರು, ನಿಶ್ಶಬ್ದವಾಗಿ ವೀಕ್ಷಿಸುವುದು ಹಾಗೂ ಇತರ ಎಲ್ಲಾ ಜೀವಿಗಳು ಮತ್ತು ನಾವು ಹಂಚಿಕೊಳ್ಳುವ ಸ್ಥಳದ ಕುರಿತು ಗೌರವ ಭಾವನೆಯನ್ನು ತಾಳುವುದು ಮುಂತಾದವುಗಳ ಅಗತ್ಯವನ್ನು ವಿವರಿಸಬಹುದು.

ಮರುದಂನಲ್ಲಿ, ನಮ್ಮ ಸುತ್ತಮುತ್ತಲಿನ ಇತರ ಸಹವರ್ತಿಗಳ ಕುರಿತ ಗೌರವ ಹಾಗೂ ಕಾಳಜಿಯ ಬಗ್ಗೆ ನಾವು ಸದಾ ಮಾತನಾಡುತ್ತೇವೆ. 'ವಾಯ್ಸಸ್ ಆಫ್ ಚಿಲ್ಡ್ರನ್' ಎನ್ನುವ ಯೋಜನೆಯೊಂದನ್ನು ಕೈಗೊಂಡಾಗ ಬಹಳಷ್ಟು ಮಕ್ಕಳು ತಮ್ಮ ತರಗತಿಗಳ ಸುತ್ತಮುತ್ತಲೂ ಗೂಡು ಕಟ್ಟುವ ಸೂರಕ್ಕಿ (sunbirds) ಹಾಗೂ ಚೋರೆ ಹಕ್ಕಿಗಳಂತೆ ತಮ್ಮನ್ನು ತಾವು ವ್ಯಕ್ತಪಡಿಸಿದರು. ಬಹಳ ಬೇಗನೆ, ಮಕ್ಕಳು, ಗೂಡು ಕಟ್ಟುವ ಜಾಗಗಳು ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಎಚ್ಚರಿಕೆಯಿಂದ ಸುಳಿದಾಡುವುದನ್ನು ಹಾಗೂ ಇತರರನ್ನು ಜಾಗರೂಕರಾಗಿರಿ ಎಂದು ಎಚ್ಚರಿಸುವುದನ್ನು ಕಂಡೆವು.

8ರಿಂದ 10 ವರ್ಷ ವಯಸ್ಸಿನ ಗುಂಪಿನಲ್ಲಿ, ಮಕ್ಕಳು ಜಗತ್ತನ್ನು ಇನ್ನಷ್ಟು ಅರ್ಥಮಾಡಿಕೊಳ್ಳುವ ಬೆಳವಣಿಗೆ ಆರಂಭವಾಗು–ವುದರಿಂದ ಪ್ರಕೃತಿಯೊಂದಿಗಿನ ಈ ರೀತಿಯ ಒಡನಾಟ ಮುಂದುವರಿಯಲು ಇನ್ನಷ್ಟು ಸಹಕಾರಿಯಾಗುತ್ತದೆ. ತಾವೂ ಆಹಾರ ಸರಪಳಿಯ ಒಂದು ಭಾಗ ಎಂದು ಅರ್ಥಮಾಡಿಕೊಳ್ಳುತ್ತಾರೆ ಹಾಗೂ ಈ ಅರಿವಿನಿಂದ ಪ್ರಕೃತಿಯೊಂದಿಗಿನ ಅವರ ಅನುಭವ ಪರಿವರ್ತನೆಯಾಗುತ್ತದೆ. ಜೀವಿಗಳ ನಡುವಿನ ಪರಸ್ಪರ ಅವಲಂಬನೆಯ ಪರಿಕಲ್ಪನೆಯ ಕುರಿತು ಯೋಚಿಸತೊಡಗುತ್ತಾರೆ. ವಿವಿಧ ರೀತಿಯ ಪಕ್ಷಿಗಳ ಪ್ರಭೇದಗಳು ಹಾಗೂ ಅವುಗಳ ವಾಸಸ್ಥಾನಗಳಲ್ಲಿರುವ ವ್ಯತ್ಯಾಸದಂತಹ ವಿವರಗಳ ಕುರಿತು ಹೆಚ್ಚು ಗಮನಹರಿಸತೊಡಗುತ್ತಾರೆ. ಅನೇಕ ಸಲ ಮರುದಂನಲ್ಲಿ ನವರಂಗ ಹಕ್ಕಿ (Indian pitta) ಹಾಗೂ ಯುರೇಶಿಯಾದ ಕೋಗಿಲೆಯಂತಹ (Eurasian cuckoo) ವಲಸೆ ಹಕ್ಕಿಗಳನ್ನು ಕಂಡಾಗ ಮಕ್ಕಳು ಬಹಳ ಉತ್ತೇಜನಗೊಂಡು ಉತ್ಸುಕರಾಗುತ್ತಾರೆ ಮತ್ತು ಹಕ್ಕಿಗಳು ಎಲ್ಲಿಂದ ಬರುತ್ತವೆ ಎಂದು ತಿಳಿದುಕೊಳ್ಳಲು ಕುತೂಹಲಭರಿತರಾಗಿರುತ್ತಾರೆ. ಅನೇಕ ಬಾರಿ ಬೆಳಗ್ಗಿನ ತರಗತಿಯ ಹೊತ್ತಿನಲ್ಲಿ ಯಾವುದೋ ಒಂದು ಮಗು ವಲಸೆ ಹಕ್ಕಿಯನ್ನು ಕಂಡರೆ ಇಡೀ ತರಗತಿಯೇ ಶಿಕ್ಷಕರ ಜೊತೆಗೂಡಿ ಹೊರಗೆ ಹೋಗಿ ಆ ಹಕ್ಕಿಗಳನ್ನು ಬರಮಾಡಿಕೊಳ್ಳುವ ಸನ್ನಿವೇಶ ಏರ್ಪಡುತ್ತದೆ. ಪರಿಸರ ಕಲಿಕೆಯನ್ನು ನಿಗದಿತ ಸಮಯದ ಚೌಕಟ್ಟಿಗೆ ನಿರ್ಬಂಧಿಸಲಾಗದು ಎನ್ನುವುದನ್ನು ಮರುದಂನ ಪರಿಸರ ಸಮನ್ವಯಕಾರರಾಗಿ ನಾವು ಅರ್ಥಮಾಡಿಕೊಂಡಿದ್ದೇವೆ.




**ಚಿತ್ರ 3. ಒಂದು ಪರಿಸರ ಶಿಬಿರದಲ್ಲಿ ಗಮನಿಸಿದ ಹಾವು ಭಕ್ಷಕ ಜುಟ್ಟು ಗಿಡುಗ (Crested Serpent Eagle)ದ ಚಿತ್ರವನ್ನು ಬಿಡಿಸಿದ 10 ವರ್ಷದ ಹುಡುಗ.**

ಮರುದಂನಲ್ಲಿ, ಕಳೆದ ಆರು ತಿಂಗಳನಿಂದ ಪ್ರತಿ ವಾರ ಅರ್ಧ ದಿನ, ನಿರ್ದಿಷ್ಟ ಸಮಯದಲ್ಲಿ ನಿಗದಿತ ಜಾಗವನ್ನು ಗಮನಿಸುವ ಕಾರ್ಯಕ್ರಮವನ್ನು (a patch-monitoring programme) ಆರಂಭಿಸಿದ್ದೇವೆ. ವಿದ್ಯಾರ್ಥಿಗಳು ನಿರ್ದಿಷ್ಟ ಜಾಗವನ್ನು ಹುಡುಕಿಕೊಳ್ಳುತ್ತಾರೆ. ಅದು ಒಂದು ಸಣ್ಣ ಪೊದೆಯ ಜಾಗವಾಗಿರಬಹುದು, ಗಿಡವಾಗಿರಬಹುದು, ಬಹಳಷ್ಟು ಚಿಟ್ಟೆಗಳನ್ನು ಆಕರ್ಷಿಸುವ ಒಂದು ಕಾಲುಹಾದಿಯಾಗಿರಬಹುದು, ಸಣ್ಣ ಉದ್ಯಾನದ ಜಾಗವಾಗಿರಬಹುದು ಅಥವಾ ನೆರೆಹೊರೆಯಲ್ಲಿರುವ ಒಂದು ಕುರುಚಲು ಜಾಗವೂ ಇರಬಹುದು, ಅಲ್ಲಿರುವ ಜೀವವೈವಿಧ್ಯತೆಯನ್ನು ಅವರು ಗಮನಿಸುತ್ತಾರೆ. ಹುಳಗಳು, ಪಕ್ಷಿಗಳು, ಪೊದೆಗಳು ಹಾಗೂ ಮರಗಳ ಹೆಸರುಗಳನ್ನು ಒಂದು ಕ್ರಮದಲ್ಲಿ ದಾಖಲಿಸುತ್ತಾರೆ. ಈ ರೀತಿಯ ನಿರಂತರ ಕಾರ್ಯಕ್ರಮಗಳಿಂದ ಕೆಲವು ಮಾಂತ್ರಿಕ ಕ್ಷಣಗಳ ಹಾಗೂ ಕಲಿಕೆಯ ಅನುಭವವನ್ನು ನಾವು ಪಡೆದೆವು. ಉದಾಹರಣೆಗೆ, ಒಂದು ಮುಳ್ಳಿನ ಪೊದೆಯ ಪಕ್ಕದಲ್ಲಿದ್ದ ಔಡಲ ಗಿಡವನ್ನು ಗಮನಿಸುತ್ತಿದ್ದಾಗ, ಆ ಗಿಡದ ಮೇಲೆ ಮೊಟ್ಟೆಯನ್ನು ಇಡುವ ಚಿಟ್ಟೆಯೊಂದನ್ನು (Common Castor) ಜೇಡವು ಬೇಟೆಯಾಡುವುದನ್ನು ನೋಡಿದೆವು. ಸಣ್ಣ ಕಪ್ಪೆಯನ್ನು ಕಂಚುಬೆನ್ನಿನ ಮರ ಹಾವೊಂದು (Bronzeback tree snake) ಬೇಟೆಯಾಡಲು ಪ್ರಯತ್ನಿಸುತ್ತಿದ್ದ ಸಮಯದಲ್ಲಿಯೇ ಕಾಜಾಣವೊಂದು ಏರೋಪ್ಲೇನ್ ಚಿಟ್ಟೆಯನ್ನು ಹಿಡಿದೇಬಿಟ್ಟಿತು. ಈ ರೀತಿಯ ಅಮೂಲ್ಯವಾದ ಅನುಭವಗಳೇ ಪ್ರಕೃತಿ ವ್ಯವಸ್ಥೆಯಲ್ಲಿನ ಪರಸ್ಪರ ಅವಲಂಬನೆಯನ್ನು ಅರ್ಥ–ಮಾಡಿಕೊಳ್ಳಲು ಬಹಳಷ್ಟು ಅವಕಾಶಗಳನ್ನು ಒದಗಿಸುತ್ತವೆ.




ಚಿತ್ರ 4. ಜಾಗವನ್ನು ವೀಕ್ಷಿಸುವ ಕಾರ್ಯಕ್ರಮದಲ್ಲಿ, ತಾನು ಗಮನಿಸಿದ ವಿಷಯಗಳ ಬಗ್ಗೆ, ಮಗುವೊಂದರ ಸಚಿತ್ರ ವಿವರಣೆ ಮತ್ತು ಕ್ರಮಾಗತ ಸಾರಾಂಶ.

ನಿಸರ್ಗದಲ್ಲಿನ ಯಾವುದೇ ಎಳೆಯ ಜೀವಿಗಳಿಗಾಗುವಂತೆ, ಪ್ರತಿ ಕ್ಷಣವೂ ನಮ್ಮ ಮಕ್ಕಳು ಹೊಸತನ್ನು ಎದುರುಗೊಂಡು ಅದನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸುವ ಕ್ಷಣವಾಗಿದೆ.

ಎಲ್ಲ ಎಳೆಯರು, ತಮ್ಮ ಸುತ್ತಮುತ್ತಲೂ ಇರುವ ದೊಡ್ಡವರ ವರ್ತನೆಯನ್ನು ಗಮನಿಸಿ ಕಲಿಯುವುದು ಹೆಚ್ಚು. ಮರುದಂನಲ್ಲಿ, ದೊಡ್ಡವರು ಹಾಗೂ ಮಕ್ಕಳು ಪರಿಸರ ಶಿಕ್ಷಣದ ಪಯಣಗಳಲ್ಲಿ ಜೊತೆಯಾಗಿ ಕಲಿಯುತ್ತಾರೆ.

ಈ ಪ್ರಕ್ರಿಯೆಯು ನಿರಂತರವಾಗಿ ನಡೆಯುವಂತಹುದು ಹಾಗೂ ಇದಕ್ಕೆ ಮಕ್ಕಳ ಪಾಲಕರು ಅಥವಾ ಪೋಷಕರ ಬೆಂಬಲ ಮತ್ತು ಪ್ರೋತ್ಸಾಹ ಅಗತ್ಯ. ನಾವು ಗಮನಿಸಿದಂತೆ ಈ ಬೆಂಬಲ ಬಹಳಷ್ಟು ರೂಪಗಳನ್ನು ಪಡೆದುಕೊಳ್ಳುತ್ತದೆ ಹಾಗೂ ಮುಖ್ಯವಾಗಿ, ಮಗುವಿನ ಸಂಭ್ರಮವನ್ನು ಹಂಚಿಕೊಳ್ಳುವ ಪ್ರಕ್ರಿಯೆಯಲ್ಲಿ ಪ್ರಕಟಗೊಳ್ಳುತ್ತದೆ. ಕೆಲವು ಪೋಷಕರು ಕೇವಲ ನೋಡುಗರಾಗಿ ಉಳಿಯದೆ ಈ ಪಯಣದಲ್ಲಿ ತಾವೂ ಭಾಗಿಯಾಗುತ್ತಾರೆ. ನಾವು ಆಸಕ್ತಿಯುಳ್ಳ ಪೋಷಕರಿಗೆ ನಮ್ಮ ಪರಿಸರ ನಡಿಗೆ, ಗಿಡಗಳನ್ನು ನೆಡುವ ಕಾರ್ಯಕ್ರಮ, ಸಿಬ್ಬಂದಿಗಳು ಹಾಗೂ ಮಕ್ಕಳೊಡನೆ ತೋಟಗಾರಿಕೆಯಲ್ಲಿ ಜೊತೆಗೂಡಲು ವೇದಿಕೆಯೊಂದನ್ನು ಒದಗಿಸಿದ್ದೇವೆ. ಪ್ರಾಥಮಿಕ ಶಾಲೆಯ ಹಂತದಲ್ಲಿನ ಈ ರೀತಿಯ ಅನುಭವಾತ್ಮಕ ಕಲಿಕೆ ಹಾಗೂ ಅಡಿಪಾಯವು ಮಾಧ್ಯಮಿಕ ಶಾಲೆಯಲ್ಲಿ ಬೆಳೆಸುವ ಪರಿಕಲ್ಪನೆಗಳಾದ ಹೊಂದಿಕೊಳ್ಳುವಿಕೆ, ಸಂತಾನೋತ್ಪತ್ತಿ, ವಲಸೆ, ನೈಸರ್ಗಿಕ ನೆಲೆ ಮುಂತಾದವುಗಳ ಕುರಿತ ಮಗುವಿನ ವಾಸ್ತವಿಕ ತಿಳುವಳಿಕೆ ಹಾಗೂ ಮೆಚ್ಚುಗೆಗೆ ಮೂಲ ಸಾಧನ ಎಂಬುದು ನಮ್ಮ ಅನಿಸಿಕೆ.

ಮಗುವಿನ ಸಹಜ ಆಕರ್ಷಣೆಯನ್ನು ಜೀವಂತವಾಗಿಡುವುದು ಬಹಳ ಮುಖ್ಯ. ಪ್ರತಿಯೊಂದು ಮಗುವಿಗೂ ನಿಸರ್ಗದೊಡನೆ ಒಡನಾಡುವುದು ಒಂದು ಅತ್ಯಂತ ಸುಂದರವಾದ ಪಯಣ. ತಮ್ಮ ಸುತ್ತಮುತ್ತಲಿರುವ ದೊಡ್ಡವರ ಬೆಂಬಲ ಸಿಕ್ಕಾಗಲಂತೂ ಇದು ಅವರ ಬಾಳಿನಲ್ಲಿ ಕೆಲವೊಂದು ಅರ್ಥಪೂರ್ಣವಾದ ಸಂಬಂಧಗಳಿಗೆ ಕಾರಣವಾಗಬಹುದಾದ ಸಾಮರ್ಥ್ಯವನ್ನು ಹೊಂದಿದೆ.

**ಅಡಿಟಿಪ್ಪಣಿ**

i https://vikalpsangam.org/article/marudam-farm-school-becoming-while-it-is-being/

---



**ಪೂರ್ಣಿಮಾ ಅರುಣ್** ಅವರು ಮರುದಂ ಫಾರ್ಮ್ ಸ್ಕೂಲ್‌ನ ವ್ಯವಸ್ಥಾಪಕ ಸದಸ್ಯರು ಹಾಗೂ ಮುಖ್ಯ ಶಿಕ್ಷಕರು. ಪಠ್ಯಕ್ರಮ ಅಭಿವೃದ್ಧಿಯಿಂದ ಹಿಡಿದು ಶಿಕ್ಷಕರ ತರಬೇತಿ ಹಾಗೂ ಆಡಳಿತಾತ್ಮಕ ವ್ಯವಸ್ಥೆಯನ್ನೊಳಗೊಂಡಂತೆ ಶಾಲೆಯನ್ನು ಮುನ್ನಡೆಸುವ ಎಲ್ಲ ಅಂಶಗಳಲ್ಲಿ ನಿರತರಾಗಿದ್ದಾರೆ. ಕಳೆದ 20 ವರ್ಷಗಳಿಂದ ತಮ್ಮ ತರಗತಿಯಲ್ಲಿ ವಿಜ್ಞಾನವನ್ನು ಕುರಿತ ವಿನೂತನ ಮಾರ್ಗಗಳನ್ನು ರೂಪಿಸುವುದರಲ್ಲಿ ತೊಡಗಿಸಿಕೊಂಡಿದ್ದಾರೆ. ಕಳೆದ ಎಂಟು ವರ್ಷಗಳಿಂದ ಇವರು, ಮರುದಂನಲ್ಲಿ ದೇಶದಾದ್ಯಂತದ ಸಾಂಪ್ರದಾಯಿಕ ಕಲೆಗಳು ಹಾಗೂ ಕರಕುಶಲ ವಸ್ತುಗಳನ್ನು ಪ್ರದರ್ಶಿಸಲು ವಾರ್ಷಿಕ ಕರಕುಶಲ ವಾರವನ್ನು ಆಯೋಜಿಸುತ್ತಿದ್ದಾರೆ. ಪರ್ಯಾಯ ಶಿಕ್ಷಣ ಜಾಲದ (Alternative Education Network) ಸಕ್ರಿಯ ಸದಸ್ಯರಾಗಿರುವ ಇವರು, ಮೂರು ವರ್ಷದ ಹಿಂದೆ ತಮಿಳುನಾಡು ಶಾಖೆಯನ್ನು ಆರಂಭಿಸುವುದರಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದರು. ಇವರನ್ನು poornima.arun12@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ವಿನಯ ವಿಠಲ್** | ಪರಿಶೀಲನೆ: **ಶೈಲಜಾ ಜಿ.ಪಿ.**